ಕರ್ನಾಟಕ ವಿಧಾನ ಪರಿಷತ್ತು

141ನೇ ಅಧಿವೇಶನ -2020

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ. | | 124 |
| ಮಾನ್ಯ ಸದಸ್ಯರ ಹೆಸರು | | ಶ್ರೀ ಸಿ.ಎಂ.ಲಿಂಗಪ್ಪ(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ಸಚಿವರು | | ಮಾನ್ಯ ಉಪಮುಖ್ಯಮಂತ್ರಿಗಳು(ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | | 21.09.2020 |
| ಪ್ರಶ್ನೆ | | ಉತ್ತರ |
| ಅ | ಬೆಂಗಳೂರು ವಿಶ್ವವಿದ್ಯಾಲಯದ ಸ್ನಾತ್ತಕೋತ್ತರ ಕೇಂದ್ರಕ್ಕೆ ಸರ್ಕಾರದಿಂದ ಮಂಜೂರಾಗಿರುವ ಅನುದಾನವೆಷ್ಟು: | ಬೆಂಗಳೂರು ವಿಶ್ವವಿದ್ಯಾಲಯದ ಭಾಗವಾಗಿರುವ ಘಟಕ ಕಾಲೇಜು ಹಾಗೂ ಸ್ನಾತ್ತಕೋತ್ತರ ಕೇಂದ್ರಗಳು ಸೇರಿದಂತೆ ಒಟ್ಟಾರೆಯಾಗಿ ವಿಶ್ವವಿದ್ಯಾಲಯಕ್ಕೆ ಅನ್ವಯಿಸುವಂತೆ ವೇತನಾನುದಾನ ಹಾಗೂ ಅಭಿವೃದ್ಧಿ ಅನುದಾನಗಳನ್ನು ಬಿಡುಗಡೆ ಮಾಡಲಾಗುತ್ತದೆ. |
| ಆ | ಈ ವಿಶ್ವವಿದ್ಯಾಲಯದ ಕಟ್ಟಡ ಮತ್ತು ಮೂಲಭೂತ ಸೌಕರ್ಯಗಳಿಗೆ ಸರ್ಕಾರದಿಂದ ಮಂಜೂರು ಮಾಡಿರುವ ಅನುದಾನವೆಷ್ಟು:(ವಿವರ ನೀಡುವುದು) | ಬೆಂಗಳೂರು ವಿಶ್ವವಿದ್ಯಾಲಯದ ಕಟ್ಟಡ ಮತ್ತು ಮೂಲಭೂತ ಸೌಕರ್ಯಗಳಿಗೆ ಹಾಗೂ ಆಸ್ತಿ ಸೃಜನೆಗೆ ಕಳೆದ ಮೂರು ವರ್ಷಗಳಲ್ಲಿ ಬಿಡುಗಡೆ ಮಾಡಲಾಗಿರುವ ಆರ್ಥಿಕ ಸಹಾಯಾನುದಾನದ ವಿವರಗಳನ್ನು ಈ ಕೆಳಕಂಡಂತೆ ಒದಗಿಸಲಾಗಿದೆ |

| ಕ್ರಸಂ | ಆರ್ಥಿಕ ವರ್ಷ | ಬಿಡುಗಡೆ ಮಾಡಲಾದ ಅನುದಾನ |
|---|---|---|
| 1 | 2017-18 | ರೂ. 2.00 ಕೋಟಿ |
| 2 | 2018-19 | ರೂ 3.00 ಕೋಟಿ |
| 3 | 2019-20 | ರೂ 1.00 ಕೋಟಿ |
| 4 | 2020-21 | ರೂ. 25.00 ಲಕ್ಷ (ಮೊದಲ ತ್ರೈಮಾಸಿಕದಲ್ಲಿ ರೂ.6.25 ಲಕ್ಷಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ) |

| | | |
|---|---|---|
| ಇ | ಸದರಿ ವಿಶ್ವವಿದ್ಯಾಲಯಕ್ಕೆ ಮಂಜೂರಾಗಿರುವ ಹುದ್ದೆಗಳೆಷ್ಟು; ಕಾರ್ಯನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಹುದ್ದೆಗಳೆಷ್ಟು; | ಘಟಕ ಕಾಲೇಜು ಹಾಗೂ ಸ್ನಾತ್ತಕೋತ್ತರ ಕೇಂದ್ರಗಳು ಸೇರಿದಂತೆ ಒಟ್ಟಾರೆಯಾಗಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಮಂಜೂರಾದ, ಕಾರ್ಯನಿರತ ಹಾಗೂ ಖಾಲಿ ಇರುವ ಹುದ್ದೆಗಳ ವಿವರಗಳನ್ನು ಈ ಕೆಳಕಂಡಂತೆ ನೀಡಲಾಗಿದೆ. |

| ಹುದ್ದೆಯ ವೃಂದ/ಸ್ವರೂಪ | ಮಂಜೂರಾದ ಹುದ್ದೆಗಳ ಸಂಖ್ಯೆ | ಕಾರ್ಯನಿರತ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|---|
| ಬೋಧಕ | 570 | 270 | 300 |
| ಬೋಧಕೇತರ | 1383 | 606 | 777 |

--2

| | | |
|---|---|---|
| ಈ | ಸದರಿ ಖಾಲಿ ಹುದ್ದೆಗಳನ್ನು ತುಂಬಲು ಹಾಗೂ ಮೂಲಭೂತ ಸೌಕರ್ಯ ಒದಗಿಸಲು ಸರ್ಕಾರ ಯಾವುದಾದರೂ ಕ್ರಮಕೈಗೊಂಡಿದೆಯೇ? | ಖಾಲಿ ಹುದ್ದೆಗಳ ನೇರ ನೇಮಕಾತಿಗಾಗಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಸಲ್ಲಿಸಲಾದ ಪ್ರಸ್ತಾವನೆಗಳ ಕುರಿತಂತೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ, ಪ್ರಸ್ತಾವನೆಗಳ ಪರಿಶೀಲನೆಯು ಅಗತ್ಯಪಡಿಸಿದ ಮಾಹಿತಿ/ವಿವರಗಳು/ದಾಖಲೆಗಳನ್ನು ಒದಗಿಸುವಂತೆ ಕೋರಿ ವಿಶ್ವವಿದ್ಯಾಲಯವನ್ನು ಹಲವಾರು ಬಾರಿ ಜ್ಞಾಪಿಸಲಾಗಿದೆ. ಬೆಂಗಳೂರು ವಿಶ್ವವಿದ್ಯಾಲಯದಿಂದ ಮರು ಪ್ರಸ್ತಾವನೆಗಳನ್ನು ನಿರೀಕ್ಷಿಸಲಾಗಿದೆ. ಕೋವಿಡ್-19 ಮಾರಕ ಪ್ರಸರಣೆಯಿಂದಾಗಿ ಎದುರಾಗಿರುವ ಆರ್ಥಿಕ ನಿರ್ಬಂಧಗಳ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯಿಂದ ಎಲ್ಲಾ ನೇರ ನೇಮಕಾತಿಗಳನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿದೆ<br><br>ಬೆಂಗಳೂರು ವಿಶ್ವವಿದ್ಯಾಲಯದ ಕಟ್ಟಡ ಮತ್ತು ಮೂಲಭೂತ ಸೌಕರ್ಯಗಳಿಗೆ ಹಾಗೂ ಆಸ್ತಿ ಸೃಜನೆಗೆ ಕಳೆದ ಮೂರು ವರ್ಷಗಳಲ್ಲಿ ಒಟ್ಟು ರೂ 6.00 ಕೋಟಿಗಳನ್ನು ಒದಗಿಸಲಾಗಿದೆ. ಶತಮಾನೋತ್ಸವದ ಪ್ರಯುಕ್ತ ಬೆಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜಾದ ವಿಶ್ವವಿದ್ಯಾಲಯ ವಿಶ್ವೇಶ್ವರಯ್ಯ ಇಂಜಿನೀಯರಿಂಗ್ ಕಾಲೇಜಿನ ಕಟ್ಟಡಗಳ ನವೀಕರಣ ಹಾಗೂ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ 2017-18ನೇ ಆರ್ಥಿಕ ಸಾಲಿನ ಆಯವ್ಯಯದಲ್ಲಿ ರೂ 25.00 ಕೋಟಿಗಳ ಅನುದಾನವನ್ನು ಘೋಷಿಸಿ ಒದಗಿಸಲಾಗಿದ್ದು, ಈ ವೆಚ್ಚದಲ್ಲಿ ಯೋಜಿಸಲಾಗಿರುವ ಕಾಮಗಾರಿಗಳ ಅಂದಾಜುಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಬೆಂಗಳೂರು ವಿಶ್ವವಿದ್ಯಾಲಯದ ಶ್ರೀ ಆಲಂಪಲ್ಲಿ ವೆಂಕಟರಾಮಯ್ಯ ಅಧ್ಯಯನ ಪೀಠವನ್ನು ರಾಷ್ಟ್ರೀಯ ಕಾರ್ಮಿಕ ಸಂಶೋಧನಾ ಸಂಸ್ಥೆಯಾದ "ವಿ.ವಿ.ಗಿರಿ.ಇನ್ಸ್ಟಿಟ್ಯೂಟ್ ಆಫ್ ಲೇಬರ್"" ಮಾದರಿಯಲ್ಲಿ ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆದೆ. ಮುಂದುವರೆದು, ವಿಶ್ವವಿದ್ಯಾಲಯ ವಿಶ್ವೇಶ್ವರಯ್ಯ ಇಂಜಿನೀಯರಿಂಗ್ ಕಾಲೇಜನ್ನು ಐ.ಐ.ಟಿ/ಐ.ಐ.ಎಂ ಮಾದರಿಯಲ್ಲಿ ಅಭಿವೃದ್ಧಿಪಡಿಸಲು ರೂ 10.00 ಕೋಟಿಗಳನ್ನು ಒದಗಿಸಲು 2020-21ನೇ ಸಾಲಿನ ಆಯವ್ಯದಲ್ಲಿ ಘೋಷಿಸಲಾಗಿದ್ದು, ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ತಜ್ಞರ ಸಮಿತಿಯಿಂದ ಸಮಗ್ರ ವರದಿಯನ್ನು ಪಡೆಯಲಾಗಿದೆ. |

ಇಡಿ/159/ಯುಬಿವಿ/2020

(ಡಾ॥ ಅಶ್ವಥ್‌ನಾರಾಯಣ ಸಿ.ಎನ್)

ಉಪಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)